**SCHEDULE - III**

**AUTHORITIES COMPETENT TO IMPOSE PENALTIES**

| ***Sl. No*** | ***Category of Post*** | ***Nature of Penalty*** | ***Authorities Competent to impose Penalties*** | ***Appellate Authority*** |
|---|---|---|---|---|
| 1 | Employees belonging to Group-B | A) Minor Penalties<br>B) Major Penalties | Chief Executive Officer of the Board.<br>Government | STATE GOVERNMENT<br>STATE GOVERNMENT |
| 2 | Employees belonging to Board | A) Minor Penalties<br>B) Major Penalties | Chief Executive Officer of the Board.<br>Chief Executive Officer of the Board. | Karnataka State Board of Wakfs.<br>Karnataka State Board of Wakfs.<br>IInd Appellate Authority Government. |

***Note:*** No Court shall take cognizance of any imposing penalty unless the remedies available under these Rules are exhausted.

***ABBAS SHARIEFF***
Under Secretary to Government
Minority Welfare Department


# ವಿಶೇಷ ರಾಜ್ಯ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧೩, ೨೦೧೩ (ಮಾರ್ಗಶಿರ ೨೨, ಶಕ ವರ್ಷ ೧೯೩೫) | ನಂ.೧೩೩೯ |
|---|---|---|
| ***Part – IV-A*** | ***Bangalore, Friday, December 13, 2013 (Margashira 22, Shaka Varsha 1935)*** | ***No.1339*** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 31 ಶಾಸನ 2009, ಬೆಂಗಳೂರು, ದಿನಾಂಕ: 13.12.2013**

The Karnataka Prevention of Dangerous Activities of Boot-Leggers, Drug-offenders, Gamblers, Goondas, Immoral Traffic Offenders and Slum-grabbers (Amendment) Bill, 2009ಕ್ಕೆ 2013ರ ನವೆಂಬರ್ ಮಾಹೆಯ ಇಪ್ಪತ್ತೆರಡನೇ ದಿನಾಂಕದಂದು ಘನತೆವೆತ್ತ ರಾಷ್ಟ್ರಪತಿಗಳ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 61 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

XX XX XX

## *KARNATAKA ACT NO.61 OF 2013*

(First published in the Karnataka Gazette Extra-ordinary on the Thirteenth day of December, 2013)

## *THE KARNATAKA PREVENTION OF DANGEROUS ACTIVITIES OF BOOTLEGGERS, DRUG-OFFENDERS, GAMBLERS, GOONDAS, IMMORAL TRAFFIC OFFENDERS AND SLUM-GRABBERS (AMENDMENT) ACT, 2009*

(Received the assent of the President of India on the Twenty-second day of November, 2013)

An Act further to amend the Karnataka Prevention of Dangerous Activities of Boot-Leggers, Drug-offenders, Gamblers, Goondas, Immoral Traffic Offenders and Slum-grabbers Act, 1985.

Whereas it is expedient further to amend the Karnataka Prevention of Dangerous Activities of Boot-Leggers, Drug-offenders, Gamblers, Goondas, Immoral Traffic Offenders and Slum-grabbers Act, 1985 (Karnataka Act 12 of 1985) for the purposes hereinafter appearing;

Be it enacted by the Karnataka State Legislature in the Sixtieth year of the Republic of India as follows:-

***1. Short title and commencement***.- (1) This Act may be called the Karnataka Prevention of Dangerous Activities of Boot-Leggers, Drug-offenders, Gamblers, Goondas, Immoral Traffic Offenders and Slum-Grabbers (Amendment) Act, 2009.

(2) It shall come into force at once.

***2. Amendment of long title and preamble***.- In the long title to and the preamble of the Karnataka Prevention of Dangerous Activities of Boot-Leggers, Drug-offenders, Gamblers, Goondas, Immoral Traffic Offenders and Slum-grabbers Act, 1985 (Karnataka Act 12 of 1985) (hereinafter referred to as the principal Act) for the words "Immoral Traffic Offenders and Slum-Grabbers" the words "Immoral Traffic Offenders, Slum-Grabbers and Video or Audio pirates" shall be substituted.

***3. Amendment of section 1***.- In section 1 of the principal Act, in sub-section (1), for the words "Immoral Traffic Offenders and Slum-Grabbers" the words "Immoral Traffic Offenders, Slum-Grabbers and Video or Audio pirates" shall be substituted.

***4. Amendment of section 2***.- In section 2 of the principal Act,-

(1) in clause (a), after sub-clause (vi), before the Explanation the following shall be inserted, namely:-

"(vii) In the case of a Video or Audio pirate, when he is engaged or is making preparations for engaging in any of his activities as a Video or Audio pirate habitually for commercial gain, which affect adversely, or are likely to affect adversely, the maintenance of public order."

(2) after clause (j), the following shall be inserted, namely:-

"(k) "Video or Audio pirate" means a person who commits or attempts to commit or abets the commission of offences of infringement of copy right habitually for commercial gain, in relation to cinematograph film or a record embodying any part of the sound track associated with the film, punishable under the Copy Right Act, 1957 (Central Act XIV of 1957)."

***5. Amendment of section 3.-*** In section 3 of the principal Act, in sub-section (1), for the words "Immoral Traffic Offender or Slum-Grabber" the words "Immoral Traffic Offender or Slum-Grabber or Video or Audio pirate" shall be substituted.

***6. Amendment of section 17***.- In section 17 of the principal Act, in two places where they occur including the heading, for the words "Immoral Traffic Offender or Slum-Grabber" the words "Immoral Traffic Offender or Slum-Grabber or Video or Audio pirate" shall be substituted.

By Order and in the name of the Governor of Karnataka,

***K.B. CHANGAPPA***
Secretary to Government (I/C)
Department of Parliamentary Affairs
and Legislation

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – ***IV-A*** | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧೩, ೨೦೧೩ (ಮಾರ್ಗಶಿರ ೨೨, ಶಕ ವರ್ಷ ೧೯೩೫) | ನಂ.೧೩೪೧ |
| ***Part – IV-A*** | ***Bangalore, Friday, December 13, 2013 (Margashira 22, Shaka Varsha 1935)*** | ***No.1341*** |

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 47 ಶಾಸನ 2013, ಬೆಂಗಳೂರು, ದಿನಾಂಕ: 13.12.2013**

ಕರ್ನಾಟಕ ಸಿವಿಲ್ ಸೇವೆಗಳು (ಜಲಸಂಪನ್ಮೂಲ ಸೇವೆ)(ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಶೇಷ ನೇಮಕಾತಿ) ವಿಧೇಯಕ, 2013 – ಇದಕ್ಕೆ 2013ರ ಡಿಸೆಂಬರ್ ತಿಂಗಳ ಹನ್ನೆರಡನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 62 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 62**

(2013ರ ಡಿಸೆಂಬರ್ ಹದಿಮೂರನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಸಿವಿಲ್ ಸೇವೆಗಳು (ಜಲ ಸಂಪನ್ಮೂಲ ಸೇವೆ) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಶೇಷ ನೇಮಕಾತಿ) ಅಧಿನಿಯಮ, 2013

(2013ರ ಡಿಸೆಂಬರ್ ಹನ್ನೆರಡನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ಸಿವಿಲ್ ಸೇವೆಗಳಲ್ಲಿ (ಜಲ ಸಂಪನ್ಮೂಲ ಸೇವೆಗಳು) ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳನ್ನು ವಿಶೇಷವಾಗಿ ನೇಮಕಾತಿ ಮಾಡಲು ಒಂದು ಅಧಿನಿಯಮ.

ಕರ್ನಾಟಕದ ಘನ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ: 41145–58/2010 (ಜಿ.ರವಿ ಮತ್ತು ಇತರ 3 ಮಂದಿ) ಮತ್ತು ಇತರ ಸಂಬಂಧಪಟ್ಟ 3 ರಿಟ್ ಅರ್ಜಿಗಳಲ್ಲಿ, ಕರ್ನಾಟಕ ಸಿವಿಲ್ ಸೇವೆಗಳ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಹಾಗೂ ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002, ಇದು ಭಾರತ ಸಂವಿಧಾನದ 16(3)ನೇ ಅನುಚ್ಛೇದ ಹಾಗೂ 14 ಮತ್ತು 16ನೇ ಅನುಚ್ಛೇದಕ್ಕೆ ವಿರುದ್ಧವಾಗಿದ್ದು, ಆರಂಭದಿಂದಲೇ ಶೂನ್ಯವಾಗಿವೆಯೆಂದು ಘೋಷಿಸಿರುವುದರಿಂದ ಮತ್ತು ನಂತರ ಪ್ರಶ್ನಿತ ವಿಲೀನ ನಿಯಮಗಳ ಮೇರೆಗೆ ಭರ್ತಿ ಮಾಡಲಾಗಿರುವ ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆಯನ್ನು ಸರ್ಕಾರವು ಕೂಡಲೇ ಪ್ರಾರಂಭಿಸತಕ್ಕದ್ದೆಂದು ಮತ್ತು ಅದನ್ನು ವಾಸ್ತವಿಕ ಕಾಲಮಿತಿಯು ಒಂದು ವರ್ಷವಾಗಿದ್ದು ಆ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ ಪೂರ್ಣಗೊಳಿಸತಕ್ಕದ್ದೆಂದು ಉಚ್ಚ ನ್ಯಾಯಾಲಯವು ಮುಂದುವರಿದು ನಿರ್ದೇಶಿಸಿರುವುದರಿಂದ, ಪ್ರಶ್ನಿತ ನಿಯಮಗಳ ಮೇರೆಗೆ

ವಿಲೀನಗೊಂಡ/ ನೇಮಕಗೊಂಡ / ಖಾಯಂಗೊಳಿಸಲಾದ ಎಲ್ಲಾ ವ್ಯಕ್ತಿಗಳನ್ನು, ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ನೇಮಕಾತಿ) (ವಿಶೇಷ) ನಿಯಮಗಳು, 1998 ರ ಅನುಸಾರವಾಗಿ ನೇಮಕಾತಿಗಳನ್ನು ಮಾಡುವವರೆಗೆ ಅಥವಾ ಒಂದು ವರ್ಷದ ಅವಧಿಯೊಳಗೆ, ಇವೆರಡರಲ್ಲಿ ಯಾವುದು ಮೊದಲೋ ಆವರೆಗೆ ಸೇವೆಯಲ್ಲಿ ಮುಂದುವರಿಸಲು ಅನುಮತಿ ನೀಡಿದೆ.

ಅಲ್ಲದೆ, ಹಿಂದೆ ಹೇಳಲಾದ ವಿಶೇಷ ನಿಯಮಗಳು ಜಾರಿಗೆ ಬಂದ ದಿನಾಂಕವಾದ 11.02.1999ರಂದು ಅಗತ್ಯ ಶೈಕ್ಷಣಿಕ ಅರ್ಹತೆಯನ್ನು ಮತ್ತು ವಯೋಮಿತಿಯನ್ನು ಹೊಂದಿರುವ ಎಲ್ಲಾ ವ್ಯಕ್ತಿಗಳು ಈ ಖಾಲಿ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಪ್ರಶ್ನಿತ ವಿಲೀನ ನಿಯಮಗಳ ಮೇರೆಗೆ ಭರ್ತಿ ಮಾಡಿದ್ದಂಥ ಖಾಲಿ ಸ್ಥಾನಗಳನ್ನು ತುಂಬಲು ದಿನಾಂಕ: 11.02.1999ರಂದು ಅಗತ್ಯ ಅರ್ಹತೆಯನ್ನು ಹೊಂದಿರುವ ವ್ಯಕ್ತಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

ಘನ ಸರ್ವೋಚ್ಚ ನ್ಯಾಯಲಯವು, 38345–38397/2012 ಸಂಖ್ಯೆಯ ಎಸ್‌ಎಲ್‌ಪಿ ಅರ್ಜಿಯನ್ನು ವಜಾಗೊಳಿಸಿ, ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಮತ್ತು ಅವನ ನೇಮಕದ ಪ್ರಾರಂಭದ ಸಮಯದಲ್ಲಿ ಅರ್ಹನಾಗಿದ್ದ ಯಾರೇ ವ್ಯಕ್ತಿಯು ಅವನಿಗೆ ವಯಸ್ಸು ಮೀರಿದ್ದರೂ ಸಹ ನೀಡಿದ ಯಾವುದೇ ಜಾಹೀರಾತಿನ ಅನುಸಾರವಾಗಿ ಅರ್ಜಿ ಸಲ್ಲಿಸಬಹುದೆಂಬಷ್ಟು ಮಟ್ಟಿಗೆ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಮಾರ್ಪಾಟು ಮಾಡಿರುವುದರಿಂದ;

ಘನ ಸರ್ವೋಚ್ಚ ನ್ಯಾಯಾಲಯವು, ಉಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಆಯ್ಕೆ ಪ್ರಕ್ರಿಯೆಯು ನ್ಯಾಯಾಲಯದ ಆದೇಶದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ಮುಕ್ತಾಯಗೊಳ್ಳದಿದ್ದರೆ, ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯು 13.12.2013ರಿಂದ ಜಾರಿಗೆ ಬರುವಂತೆ ಕಾರ್ಯನಿರ್ವಹಿಸುವುದನ್ನು ನಿಲ್ಲಿಸತಕ್ಕದ್ದೆಂದು ಅಭಿಪ್ರಾಯಪಟ್ಟಿರುವುದರಿಂದ;

ಅದರಿಂದಾಗಿ, ಅಪಾರ ಸಂಖ್ಯೆಯ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ಸೇವೆಗಳು ಅಸ್ತಿತ್ವದಲ್ಲಿರುವುದು ನಿಂತುಹೋಗುತ್ತದೆ ಹಾಗೂ ಬಚಾವತ್ ಐತೀರ್ಪು ಮತ್ತು ಇತ್ತೀಚೆಗೆ ಹೊರಡಿಸಿದ ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ ಐತೀರ್ಪು–IIನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಶ್ವ ಬ್ಯಾಂಕ್‌ನ ನೆರವಿನಿಂದ ಕೈಗೆತ್ತಿಕೊಳ್ಳಲಾದ ಪ್ರಗತಿಯಲ್ಲಿರುವ ಯೋಜನೆಗಳನ್ನು ನಿಲ್ಲಿಸಬೇಕಾಗುವ ಕಾರಣದಿಂದ ರಾಜ್ಯದ ಹಿತಾಸಕ್ತಿಯು ಅಪಾಯಕ್ಕೆ ಸಿಲುಕುತ್ತದೆ.

ಕರ್ನಾಟಕ ರಾಜ್ಯಕ್ಕೆ, ಪ್ರಗತಿಯಲ್ಲಿರುವ ಯೋಜನೆಗಳನ್ನು ಪೂರ್ಣಗೊಳಿಸಬೇಕಾದ ಹಾಗೂ ರಾಜ್ಯದ ರೈತರ ಮಹತ್ವದ ಹಿತಾಸಕ್ತಿಯನ್ನು ಕಾಪಾಡಲು ತನ್ನ ಪಾಲಿನ ನೀರನ್ನು ಬಳಸಿಕೊಳ್ಳಲು ಮುಂದಿನ ಯೋಜನೆಗಳನ್ನೂ ಸಹ ಕೈಗೆತ್ತಿಕೊಳ್ಳಬೇಕಾದ ಬಾಧ್ಯತೆಯಿರುವುದರಿಂದ ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ 2002ರ ನಿಯಮಗಳ ಅಡಿಯಲ್ಲಿ ವಿಲೀನಗೊಳಿಸಲಾದ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳು ಸಲ್ಲಿಸಿರುವ ಸುದೀರ್ಘ ವರ್ಷಗಳ ಸೇವೆಯನ್ನು ಮತ್ತು ಅವರ ಅನುಭವವನ್ನು ಬಳಸಿಕೊಳ್ಳುವ ಅಗತ್ಯವಿರುವುದರಿಂದ;

ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ನೇಮಕಾತಿ) (ವಿಶೇಷ) ನಿಯಮಗಳು, 1998 ಒಂದು ಬಾರಿಯ ಕಾರ್ಯಾಚರಣೆಯ ನಿಯಮಗಳಾಗಿದ್ದು, ಮೇಲೆ ಉಲ್ಲೇಖಿಸಲಾದ ತೀರ್ಪುಗಳಿಗೆ ಅನುಸಾರವಾಗಿ ನೇಮಕ ಮಾಡಬೇಕಾದ ಅಭ್ಯರ್ಥಿಗಳಿಗೆ ಅನ್ವಯವಾಗುವ ವಯೋಮಿತಿಗೆ ಸಂಬಂಧಿಸಿದಂತೆ ಅದರಲ್ಲಿ ಕೆಲವು ಮಾರ್ಪಾಟು ಮಾಡುವುದು ಅಗತ್ಯವಿರುವುದರಿಂದ, ಮತ್ತು ಕರ್ನಾಟಕ ಸಿವಿಲ್ ಸೇವೆಗಳು (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002ರ ಮೇರೆಗೆ ವಿಲೀನಗೊಳಿಸಲಾದ 417 ಇಂಜಿನಿಯರ್‌ಗಳ ಹಿತಾಸಕ್ತಿಯನ್ನು ಸಂರಕ್ಷಿಸುವುದಕ್ಕಾಗಿ ಹಾಗೂ ರಾಜ್ಯ ಸರ್ಕಾರದಲ್ಲಿ ಅವರು ಸಲ್ಲಿಸಿರುವ ಸುದೀರ್ಘ ಸೇವೆಯನ್ನು ಪರಿಗಣಿಸುವುದಕ್ಕಾಗಿ ಮತ್ತು ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಉಪಬಂಧಿಸುವುದು ಸಹ ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ಅರವತ್ತನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. **ಚಿಕ್ಕ ಹೆಸರು, ಪ್ರಾರಂಭ ಮತ್ತು ಅನ್ವಯ.–** (1)ಈ ಅಧಿನಿಯಮವನ್ನು ಕರ್ನಾಟಕ ಸಿವಿಲ್ ಸೇವಾ (ಜಲ ಸಂಪನ್ಮೂಲ ಸೇವೆಗಳು) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಶೇಷ ನೇಮಕಾತಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ನೇಮಕಾತಿ) ನಿಯಮಗಳು, 1988 ಅಥವಾ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಮೇರೆಗೆ ರಚಿಸಲಾದ ಅಥವಾ ರಚಿಸಲಾಗಿದೆಯೆಂದು ಭಾವಿಸಲಾದ ಯಾವುದೇ ಇತರ ನಿಯಮದಲ್ಲಿ, ಅಥವಾ ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಏನೇ ಇದ್ದರೂ, ಈ ಅಧಿನಿಯಮವು, ಕರ್ನಾಟಕ ಸಿವಿಲ್ ಸೇವೆಗಳ (ಜಲಸಂಪನ್ಮೂಲ ಸೇವೆಗಳು) ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗಳ ಪ್ರವರ್ಗಗಳಲ್ಲಿರುವ 550 ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಷ್ಟು ಹೆಚ್ಚುವರಿ ಸಂಖ್ಯೆಯ ಖಾಲಿಹುದ್ದೆಗಳ ನೇರ ನೇಮಕಾತಿಗೆ ಅನ್ವಯವಾಗತಕ್ಕದ್ದು:

ಪರಂತು, ಈ ಅಧಿನಿಯಮದಲ್ಲಿ ಇರುವುದು ಯಾವುದೂ, ಒಂದಕ್ಕಿಂತ ಹೆಚ್ಚಿನ ನೇಮಕಾತಿಗೆ ಅನ್ವಯವಾಗತಕ್ಕದ್ದಲ್ಲ.

2. **ಪರಿಭಾಷೆಗಳು.–** (1) ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು" ಎಂದರೆ, ಕರ್ನಾಟಕ ಸಿವಿಲ್ ಸೇವಾ (ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಆಧಾರದ ಮೇಲೆ ಜಲ ಸಂಪನ್ಮೂಲ ಸೇವೆಗಳಲ್ಲಿ ನೇಮಕಗೊಂಡ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ವಿಲೀನತೆ) (ವಿಶೇಷ) ನಿಯಮಗಳು, 2002ರ ಮೇರೆಗೆ ಪರಿಭಾಷಿಸಿದಂತಹ ಮತ್ತು ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) ಇಲಾಖೆಯಲ್ಲಿ ವಿಲೀನಗೊಂಡಂತಹ ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳು;

(ಬಿ) **"ಆಯ್ಕೆ ಪ್ರಾಧಿಕಾರ"** ಎಂದರೆ, ರಾಜ್ಯ ಸರ್ಕಾರವು, ಈ ಸಂಬಂಧದಲ್ಲಿ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಿ ಅಥವಾ ಪ್ರಾಧಿಕಾರ.

(2) ಈ ಅಧಿನಿಯಮದಲ್ಲಿ ಬಳಸಿದ ಆದರೆ ಇಲ್ಲಿ ಪರಿಭಾಷಿಸಿಲ್ಲದ ಪದಗಳು ಮತ್ತು ಪದಾವಳಿಗಳು, ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಇರುವಂಥ ಅರ್ಥವನ್ನೇ ಹೊಂದಿರತಕ್ಕದ್ದು.

**3. ಆಯ್ಕೆ ಪ್ರಾಧಿಕಾರ.–** (1) ಈ ಅಧಿನಿಯಮದ ಮೇರೆಗೆ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆಯನ್ನು ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು.

(2) ಆಯ್ಕೆ ಪ್ರಾಧಿಕಾರವು, 7ನೇ ಪ್ರಕರಣಕ್ಕೆ ಅನುಸಾರವಾಗಿ ಆಯ್ಕೆಯಾದ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ತಯಾರಿಸತಕ್ಕದ್ದು.

**4. ವಯೋಮಿತಿ.–** ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ

6ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ವಯೋಮಿತಿಗೆ ಅನುಸಾರವಾಗಿ ದಿನಾಂಕ:11.02.1999ರಂದು ಅರ್ಹರಾಗಿರುವ ಅಭ್ಯರ್ಥಿಗಳು ಮಾತ್ರ ಈ ಅಧಿನಿಯಮದ ಅಡಿಯಲ್ಲಿನ ನೇಮಕಾತಿಗೆ ಅರ್ಜಿಸಲ್ಲಿಸಲು ಅರ್ಹರಾಗಿರತಕ್ಕದ್ದು:

ಪರಂತು, ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳಿಗೆ ಅಥವಾ ಕಿರಿಯ ಇಂಜಿನಿಯರುಗಳಿಗೆ ಸಂಬಂಧಿಸಿದಂತೆ ನಿಯಮಿಸಲಾದ ಗರಿಷ್ಠ ವಯೋಮಿತಿಯನ್ನು ದಿನಾಂಕ 11.02.1999ರಂದು ಇದ್ದಂತೆ, ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಮೇಲೆ ಅವರು ಸೇವೆಯನ್ನು ಸಲ್ಲಿಸಿದ ಸಂಖ್ಯೆಯ ವರ್ಷಗಳಷ್ಟು ಸಡಿಲಗೊಳಿಸತಕ್ಕದ್ದು.

**5. ಅರ್ಹತೆ.–** ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗೆ ಈ ಅಧಿನಿಯಮದ ಅಡಿಯಲ್ಲಿ ನೇಮಕವನ್ನು ಮಾಡುವ ಉದ್ದೇಶಕ್ಕಾಗಿ ಇರಬೇಕಾದ ಅರ್ಹತೆಯು, ದಿನಾಂಕ 11.02.1999 ರಂದು ಇದ್ದಂತೆ, ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆ) (ನೇಮಕಾತಿ) ನಿಯಮಗಳು, 1998ರಲ್ಲಿ ಅನುಕ್ರಮವಾಗಿ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗೆ ನಿರ್ದಿಷ್ಟಪಡಿಸಲಾದ ಅರ್ಹತೆಯೇ ಆಗಿರತಕ್ಕದ್ದು. ದಿನಾಂಕ 11.02.1999ರಂದು ಇದ್ದಂತೆ ಮೇಲ್ಕಂಡ ಅರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳು ಮಾತ್ರ ಅರ್ಜಿಸಲ್ಲಿಸಲು ಅರ್ಹರಾಗಿರತಕ್ಕದ್ದು.

**6. ನೇಮಕಾತಿಗೆ ಅರ್ಜಿ.–** ಆಯ್ಕೆ ಪ್ರಾಧಿಕಾರವು, ಅರ್ಹತಾ ಷರತ್ತುಗಳು, ಆಯ್ಕೆಯ ಸ್ವರೂಪ, ಭರ್ತಿ ಮಾಡಬೇಕಾದ ಖಾಲಿಹುದ್ದೆಗಳ ಸಂಖ್ಯೆ ಮತ್ತು ಜಾರಿಯಲ್ಲಿರುವ ಮೀಸಲಾತಿ ಆದೇಶಗಳಿಗೆ ಅನುಸಾರವಾದ ವರ್ಗೀಕರಣವನ್ನು ನಿರ್ದಿಷ್ಟಪಡಿಸಿ ಸರ್ಕಾರಿ ರಾಜ್ಯ ಪತ್ರದಲ್ಲಿ ಖಾಲಿ ಹುದ್ದೆಗಳ ಬಗ್ಗೆ ಜಾಹೀರಾತು ನೀಡತಕ್ಕದ್ದು ಮತ್ತು ಉದ್ದೇಶಿತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು. ಅಂಥ ಜಾಹೀರಾತಿನ ಸಾರಾಂಶವನ್ನು ರಾಜ್ಯದಲ್ಲಿ ವ್ಯಾಪಕವಾಗಿ ಪ್ರಸಾರದಲ್ಲಿರುವ ಎರಡು ವಾರ್ತಾ ಪತ್ರಿಕೆಗಳಲ್ಲಿಯೂ ಸಹ ಪ್ರಕಟಿಸತಕ್ಕದ್ದು.

**7. ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವಿಧಾನ.–** (1) ಆಯ್ಕೆ ಪ್ರಾಧಿಕಾರವು, ಅರ್ಹತಾ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರಿನ ಆಧಾರದ ಮೇಲೆ ಮತ್ತು ಈ ಅಧಿನಿಯಮದ ಮೇರೆಗೆ ಅನುಮತಿಸಲಾದ ಕೃಪಾಂಕವನ್ನು ಪರಿಗಣನೆಗೆ ತೆಗೆದುಕೊಂಡು, ಮತ್ತು ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗಾಗಿ ಮೀಸಲಾತಿಯನ್ನು ಒದಗಿಸುವ ಜಾರಿಯಲ್ಲಿರುವ ಆದೇಶಗಳಿಗೆ ಅಥವಾ ಜಾರಿಯಲ್ಲಿರುವ ಕಾನೂನಿನ ಪ್ರಕಾರ ಯಾವುದೇ ಇತರ ಮೀಸಲಾತಿಗೆ ಒಳಪಟ್ಟು, ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳ ಹುದ್ದೆಗಳಿಗೆ ಈ ಅಧಿನಿಯಮದ ಮೇರೆಗೆ ನೇಮಕ ಮಾಡಲು ಅರ್ಹರಾಗಿರುವ ಅಭ್ಯರ್ಥಿಗಳ ಪಟ್ಟಿಗಳನ್ನು ಮೆರಿಟ್ ಅನುಸಾರವಾಗಿ ತಯಾರಿಸತಕ್ಕದ್ದು. ಎರಡು ಅಥವಾ ಹೆಚ್ಚಿನ ಅಭ್ಯರ್ಥಿಗಳು ಪಡೆದಿರುವ ಅಂಕಗಳು ಸಮನಾಗಿದ್ದರೆ, ಅಂಥ ಅಭ್ಯರ್ಥಿಗಳ ಸಂಬಂಧದಲ್ಲಿ ಮೆರಿಟ್ ಕ್ರಮಾಂಕವನ್ನು ಅವರ ವಯಸ್ಸಿನ ಆಧಾರದ ಮೇಲೆ, ವಯಸ್ಸಿನಲ್ಲಿ ಹಿರಿಯನಾದವನನ್ನು ಕಿರಿಯನಿಗಿಂತ ಮೇಲಿನ ಸ್ಥಾನದಲ್ಲಿ ನಿಗದಿಪಡಿಸತಕ್ಕದ್ದು.

ಪರಂತು, ಹುದ್ದೆಗಳ ಮೀಸಲಾತಿ ಉದ್ದೇಶಕ್ಕಾಗಿ ಆದಾಯವನ್ನು ನಿರ್ಧರಿಸುವ ಸಂದರ್ಭದಲ್ಲಿ, ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳ ಸಂಬಳದ ಆದಾಯವನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ.

(2) (1)ನೇ ಉಪ–ಪ್ರಕರಣದ ಮೇರೆಗೆ ಆಯ್ಕೆಮಾಡಬೇಕಾದ ಅಭ್ಯರ್ಥಿಗಳ ಸಂಖ್ಯೆಯು ಅಧಿಸೂಚಿಸಿದ ಖಾಲಿಹುದ್ದೆಗಳ ಸಂಖ್ಯೆಗೆ ಸಮನಾಗಿರತಕ್ಕದ್ದು:

ಪರಂತು, ಮೇಲಿನ ಪಟ್ಟಿಗಳನ್ನು ತಯಾರಿಸುವಾಗ,–

(ಎ) ಅಭ್ಯರ್ಥಿಯು, ರಾಜ್ಯದ ನೀರಾವರಿ ಇಲಾಖೆಯಲ್ಲಿ, ಸಂದರ್ಭಾನುಸಾರ, ಸಹಾಯಕ ಇಂಜಿನಿಯರ್ ಅಥವಾ ಕಿರಿಯ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದ್ದರೆ, ಅಂಥ ಅಭ್ಯರ್ಥಿಯು ಅರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರಿಗೆ ಗರಿಷ್ಠ ಶೇಕಡಾ ಮೂವತ್ತಕ್ಕೆ ಒಳಪಟ್ಟು, ಪ್ರತೀ ಸೇವಾ ವರ್ಷಕ್ಕೆ ಶೇಕಡಾ ಐದರಷ್ಟು ಕೃಪಾಂಕವನ್ನು ಸೇರಿಸತಕ್ಕದ್ದು.

(ಬಿ) ಸ್ಥಳಾಂತರಿತ ಕುಟುಂಬಗಳಿಗೆ ಸೇರಿದ ಅಭ್ಯರ್ಥಿಗಳ ಸಂದರ್ಭದಲ್ಲಿ, ಅರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳಿಗೆ ಶೇಕಡಾ ಒಂದರಷ್ಟು ಕೃಪಾಂಕವನ್ನು ಸೇರಿಸತಕ್ಕದ್ದು.

**ವಿವರಣೆ 1:** (ಎ) ಖಂಡದ ಮೇರೆಗೆ ಕೃಪಾಂಕವನ್ನು ನೀಡುವ ಉದ್ದೇಶಕ್ಕಾಗಿ, ಒಂದು ವರ್ಷದ ಭಾಗಶ: ಕಾಲ ಸಲ್ಲಿಸಿದ ಸೇವೆಯನ್ನು ಇಡೀ ವರ್ಷ ಸಲ್ಲಿಸಿದ ಸೇವೆಯೆಂದು ಸಹ ಪರಿಗಣಿಸತಕ್ಕದ್ದು.

**ವಿವರಣೆ 2:** ಒಬ್ಬ ವ್ಯಕ್ತಿಗೆ ಸಂಬಂಧಿಸಿದಂತೆ ಸ್ಥಳಾಂತರಿತ ಕುಟುಂಬ ಎಂದರೆ, ನೀರಾವರಿ ಯೋಜನೆಯ ಉದ್ದೇಶಕ್ಕಾಗಿ, ಬಾಧಿತ ವಲಯದಲ್ಲಿ ಗ್ರಾಮಠಾಣಾ ಫ್ಲಾಟನ್ನು ಅಥವಾ ಇತರ ಸ್ವತ್ತನ್ನೂ ಒಳಗೊಂಡಂತೆ ಅಂಥ ಭೂಮಿಯನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದ ಈ ಭೂಮಿ ಅಥವಾ ಇತರ ಸ್ವತ್ತಿನಿಂದ ಸ್ಥಳಾಂತರಿಸಲಾಗಿರುವ ಯಾರೇ ವ್ಯಕ್ತಿ, ಗಂಡ ಅಥವಾ ಸಂದರ್ಭಾನುಸಾರ ಹೆಂಡತಿ, ಅಥವಾ ಅಂಥ ವ್ಯಕ್ತಿ ಹಾಗೂ ಅವರೊಂದಿಗೆ ವಾಸಿಸುವ ಹಾಗೂ ಅವರ ಮೇಲೆ ಅಥವಾ ಜೀವನೋಪಾಯಕ್ಕೆ ಅವರನ್ನು ಅವಲಂಬಿಸಿದ ಅವರ ಮಗ ಹಾಗೂ ಅವಿವಾಹಿತ ಮಗಳು ಹಾಗೂ ಹಿಡುವಳಿ

ದಾರನಾಗಿರುವಂಥ, ಗೇಣಿದಾರನಾಗಿರುವಂಥ ವ್ಯಕ್ತಿ, ಸರ್ಕಾರಿ ಗೇಣಿದಾರ ಅಥವಾ ಸ್ವತ್ತಿನ ಮಾಲೀಕ. ಸ್ಥಳಾಂತರಿತ ಕುಟುಂಬಕ್ಕೆ ಸಂಬಂಧಿಸಿದಂತೆ ಪ್ರಮಾಣ ಪತ್ರವನ್ನು ನೀಡುವ 'ಪ್ರಾಧಿಕಾರಿ'ಯು ಜಿಲ್ಲಾಧಿಕಾರಿಯಾಗಿರತಕ್ಕದ್ದು.

(3) ಆಯ್ಕೆ ಪಟ್ಟಿಯನ್ನು, ಆಯ್ಕೆ ಪ್ರಾಧಿಕಾರದ ಕಛೇರಿಯ ಸೂಚನಾ ಫಲಕದಲ್ಲಿ ಮತ್ತು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

8. **ಅಭ್ಯರ್ಥಿಗಳ ನೇಮಕಾತಿ.–** (1) ಆಯ್ಕೆ ಪ್ರಾಧಿಕಾರವು ಯಾರ ಹೆಸರುಗಳನ್ನು ಆಯ್ಕೆ ಪಟ್ಟಿಯಲ್ಲಿ ಸೇರಿಸಿ, ಲಭ್ಯವಾಗುವಂತೆ ಮಾಡಿದೆಯೋ ಆ ಅಭ್ಯರ್ಥಿಗಳನ್ನು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಅವರ ಹೆಸರುಗಳು ಕಂಡುಬರುವಂಥ ಕ್ರಮದಲ್ಲಿ, ನೇಮಕಾತಿ ಪ್ರಾಧಿಕಾರವು ನೇಮಕ ಮಾಡಿಕೊಳ್ಳತಕ್ಕದ್ದು. ಅಂಥ ನೇಮಕಾತಿಯನ್ನು ಮಾಡಿಕೊಳ್ಳುವ ಮುಂಚೆ, ನೇಮಕಾತಿ ಪ್ರಾಧಿಕಾರವು, ನೇಮಕಾತಿಗಾಗಿ ಅಭ್ಯರ್ಥಿಯು ಸೂಕ್ತನಾಗಿರುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸಿವಿಲ್ ಸೇವಾ(ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪಬಂಧಗಳಿಗೆ ಅನುಸಾರವಾಗಿ ಅವರ ಪೂರ್ವನಡತೆ ಮತ್ತು ದೈಹಿಕ ದಾರ್ಢ್ಯತೆ ಬಗ್ಗೆ ತಾನು ಮನವರಿಕೆ ಮಾಡಿಕೊಳ್ಳತಕ್ಕದ್ದು.

(2) ಆಯ್ಕೆ ಪಟ್ಟಿಯಲ್ಲಿ ಅಭ್ಯರ್ಥಿಯ ಹೆಸರು ಸೇರಿರುವ ಮಾತ್ರಕ್ಕೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ಪ್ರಾಪ್ತವಾಗತಕ್ಕದ್ದಲ್ಲ.

(3) ಅರ್ಹ ಅಭ್ಯರ್ಥಿಗಳನ್ನು ಆಯ್ಕೆಮಾಡುವ ಮತ್ತು ಅಂಥ ಹೆಸರುಗಳನ್ನು ಅಧಿಸೂಚಿಸುವ ಇಡೀ ಪ್ರಕ್ರಿಯೆಯನ್ನು, ಸಾಧ್ಯವಾದಷ್ಟು ಮಟ್ಟಿಗೆ, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದೊಳಗೆ ಪೂರ್ಣಗೊಳಿಸತಕ್ಕದ್ದು.

9. **ಆಯ್ಕೆ ಪಟ್ಟಿಯು ಚಾಲ್ತಿಯಲ್ಲಿರುವ ಅವಧಿ.–** ಆಯ್ಕೆ ಪ್ರಾಧಿಕಾರವು ಆಯ್ಕೆ ಮಾಡಿದ ಮತ್ತು ನೇಮಕಾತಿ ಪ್ರಾಧಿಕಾರಕ್ಕೆ ವಹಿಸಿದ ಅಭ್ಯರ್ಥಿಗಳ ಪಟ್ಟಿಯು, ಪಟ್ಟಿಯಲ್ಲಿ ಸೇರಿಸಿರುವ ಎಲ್ಲಾ ಅಭ್ಯರ್ಥಿಗಳು ನೇಮಕವಾಗುವವರೆಗೆ ಸಿಂಧುವಾಗಿರತಕ್ಕದ್ದು.

10. **ಅಭ್ಯರ್ಥಿಗಳು ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸುವ ಹೊಣೆಗಾರಿಕೆ.–** ಈ ಅಧಿನಿಯಮದ ಮೇರೆಗೆ ಆಯ್ಕೆಯಾದ ಮತ್ತು ನೇಮಕಗೊಂಡ ಅಭ್ಯರ್ಥಿಗಳು, ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಹೊಣೆಗಾರರಾಗಿರತಕ್ಕದ್ದು.

11. **ಹಿಂದಿನ ಸೇವೆಯನ್ನು ಪರಿಗಣಿಸುವುದು.–** ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ,–

(1) ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು, 2013ರ ಡಿಸೆಂಬರ್ ಹತ್ತನೇ ದಿನದಂದು, ಅವರು ಯಾವ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಆ ಹುದ್ದೆಯನ್ನು ಹೊಂದಿದ್ದರೋ ಅವೇ ನಿಬಂಧನೆಗಳು ಮತ್ತು ಷರತ್ತುಗಳ ಪ್ರಕಾರ ಅವರು ಖಾಯಂ ಆಗಿ ನೇಮಕಗೊಂಡಿದ್ದರೆ ಹೇಗೋ ಹಾಗೆ, ಈ ಅಧಿನಿಯಮದ ಮೇರೆಗೆ ನೇಮಕಾತಿ ಪ್ರಕ್ರಿಯೆ ಪೂರ್ಣವಾಗುವವರೆಗೆ ಸೇವಾ ಷರತ್ತುಗಳಿಗೆ ಸಂಬಂಧಪಡುವ ಎಲ್ಲ ಇತರ ನಿಯಮಗಳನ್ನು ಅನ್ವಯಿಸುವುದಕ್ಕೆ ಒಳಪಟ್ಟು ಆ ಹುದ್ದೆಯಲ್ಲಿ ಕಾರ್ಯನಿರ್ವಹಿಸುವುದನ್ನು ಮುಂದುವರಿಸತಕ್ಕದ್ದು.

(2) ಕರ್ನಾಟಕ ಸಿವಿಲ್ ಸೇವಾ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಹಾಗೂ ತಾತ್ಕಾಲಿಕ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳು ಹಾಗೂ ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002 ಪ್ರಾರಂಭವಾಗುವುದಕ್ಕೆ ಮುಂಚೆ ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು ಸಲ್ಲಿಸಿದ ಸೇವೆಯನ್ನು, ರಜೆ, ವೇತನ, ಪಿಂಚಣಿ ಅಥವಾ ಜ್ಯೇಷ್ಠತೆಯ ಉದ್ದೇಶಕ್ಕಾಗಿ ಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ:

ಪರಂತು, ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳು ಹಾಗೂ ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002ರ ಪ್ರಾರಂಭದ ನಂತರ ಮತ್ತು ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಲೋಕೋಪಯೋಗಿ (ನೀರಾವರಿ ಸೇವೆ)ಯಲ್ಲಿ ತಾತ್ಕಾಲಿಕ ಅಥವಾ ಗುತ್ತಿಗೆ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು ಸಲ್ಲಿಸಿದ ಸೇವೆಯನ್ನು, ಅವರ ರಜೆ, ವೇತನ, ಪಿಂಚಣಿ ಅಥವಾ ಜ್ಯೇಷ್ಠತೆ ಉದ್ದೇಶಕ್ಕಾಗಿ ಗಣನೆಗೆ ತೆಗೆದುಕೊಳ್ಳತಕ್ಕದ್ದು:

ಮತ್ತೂ ಪರಂತು, ವೇತನ ನಿಗದಿ ಮತ್ತು ವೇತನ ಸಂರಕ್ಷಣೆಯು ಭಾವನಾತ್ಮಕವಾಗಿರತಕ್ಕದ್ದು ಮತ್ತು ವೇತನದ ಯಾವುದೇ ಬಾಕಿಗಳಿಗೆ ಅವರು ಅರ್ಹರಾಗಿರತಕ್ಕದ್ದಲ್ಲ:

12. **ಇತರ ನಿಯಮಗಳ ಅನ್ವಯ.–** ಕರ್ನಾಟಕ ಸಿವಿಲ್ ಸೇವಾ ನಿಯಮಗಳು, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 ಹಾಗೂ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ ಅಡಿಯಲ್ಲಿ ಮಾಡಲಾದ ಅಥವಾ ಮಾಡಲಾಗಿದೆಯೆಂದು ಭಾವಿಸಲಾದ ಎಲ್ಲಾ ಇತರ ನಿಯಮಗಳ ಉಪಬಂಧಗಳು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಈ ಅಧಿನಿಯಮದ ಮೇರೆಗೆ ಆಯ್ಕೆಯಾದ ಮತ್ತು ನೇಮಕಗೊಂಡ ವ್ಯಕ್ತಿಗಳಿಗೆ ಅನ್ವಯವಾಗತಕ್ಕದ್ದು.

13. **ತೊಂದರೆಗಳ ನಿವಾರಣಾಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಆ ತೊಂದರೆಯನ್ನು ನಿವಾರಿಸಲು ಅಗತ್ಯವೆಂದು ಅಥವಾ ಯುಕ್ತವೆಂದು ಭಾವಿಸುವಂಥ ಉಪಬಂಧಗಳನ್ನು ರಚಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಬಿ. ಚಂಗಪ್ಪ**
ಸರ್ಕಾರದ ಕಾರ್ಯದರ್ಶಿ(ಪ್ರ)
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧೩, ೨೦೧೩ (ಮಾರ್ಗಶಿರ ೨೨, ಶಕ ವರ್ಷ ೧೯೩೫) | ನಂ.೧೩೪೨ |
|---|---|---|
| Part – IV-A | Bangalore, Friday, December 13, 2013 (Margashira 22, Shaka Varsha 1935) | No.1342 |


## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 18 ಸೇವನೆ 2013, ಬೆಂಗಳೂರು, ದಿನಾಂಕ: 13/12/2013**

ಕರ್ನಾಟಕ ಸಿವಿಲ್ ಸೇವಾ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು, 1978, ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ:13.11.2013ರ ಅಧಿಸೂಚನೆ ಸಂಖ್ಯೆ: ಸಿಆಸುಇ 18 ಸೇವನೆ 2013 ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ 15 ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 13.11.2013ರ ಕರ್ನಾಟಕ ರಾಜ್ಯಪತ್ರದ ಭಾಗ–IVಎ (ಪಿ.ಆರ್.ಸಂ: 1268)ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ:13.11.2013 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ಯಾವುದೇ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ, 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

### ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಲಿಪಿಕ ಹುದ್ದೆಗಳ ನೇಮಕಾತಿ) (ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು

**2. ನಿಯಮ 4ಕ್ಕೆ ತಿದ್ದುಪಡಿ:–** ಕರ್ನಾಟಕ ಸಿವಿಲ್ ಸೇವಾ(ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು, 1978ರ, ನಿಯಮ 4 ರ ,.–

(i) ಉಪ ನಿಯಮ (1) ರ ಖಂಡ (ii) ರಲ್ಲಿ "ಪ್ರೌಢ ಶಿಕ್ಷಣ ವ್ಯಾಸಂಗ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ) ಅಥವಾ ಇದರ ತತ್ಸಮಾನ ವಿದ್ಯಾರ್ಹತೆ" ಬದಲಾಗಿ "ಪದವಿ ಪೂರ್ವ ಶಿಕ್ಷಣ ಪರೀಕ್ಷೆ ಅಥವಾ ಇದರ ತತ್ಸಮಾನ ವಿದ್ಯಾರ್ಹತೆ" ಎಂದು ಪ್ರತಿಸ್ಥಾಪಿಸತಕ್ಕದ್ದು.

(ii) ಉಪ ನಿಯಮ (2) ರಲ್ಲಿ "ಪ್ರೌಢ ಶಿಕ್ಷಣ ವ್ಯಾಸಂಗ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ) ಅಥವಾ ಇದರ ತತ್ಸಮಾನ ವಿದ್ಯಾರ್ಹತೆ" ಬದಲಾಗಿ "ಪದವಿ ಪೂರ್ವ ಶಿಕ್ಷಣ ಪರೀಕ್ಷೆ ಅಥವಾ ಇದರ ತತ್ಸಮಾನ ವಿದ್ಯಾರ್ಹತೆ" ಎಂದು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ. ಮಂಗಳ.ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## *PERSONNEL AND ADMINISTRATIVE REFORMS SECRETARIAT*

### *NOTIFICATION*

***NO. DPAR 18 SCR 2013, Bangalore, dated: 13.12.2013***

Whereas the draft of the Karnataka Civil Services ( Recruitment to the Ministerial Posts) Rules, 1978, was published as required by clause (a), sub-section (2) of section 3 read with section 8 of the Karnataka State Civil Services Act, 1978 (Karnataka Act 14 of 1990) in Notification No. DPAR 18 SCR 2013 dated:13.11.2013 in part IV A (PR No. 1268) of the Karnataka Gazette Extraordinary dated:13.11.2013 inviting objections and suggestions from all persons likely to be affected thereby within fifteen days from the date of publication of the draft in Official Gazette.

Whereas, the said Gazette was made available to the public on 13.11.2013.

And Whereas, no objections and suggestions have been received in this behalf by the State Government.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following rules, namely:-

***RULES***

1. ***Title and commencement :-*** (1) These rules may be called the Karnataka Civil Services( Recruitment to the Ministerial Posts) (Amendment) Rules, 2013.

(2) They shall come into force from the date of their publication in the Official Gazette.

***2. Amendment of rule 4.-*** In the Karnataka Civil Services (Recruitment to the Ministerial Posts) Rules, 1978, in rule 4,-

(i) in sub-rule (1), in clause(ii), for the words "Secondary School Leaving Certificate Examination or equivalent qualification" the words "Pre-university Course examination or equivalent qualification" shall be substituted.

(ii) in sub-rule 2, for the words "Secondary School Leaving Certificate Examination or equivalent qualification" the words "Pre-University Course examination or equivalent qualification" shall be substituted.

By order and in the name of the Governor of Karnataka

***Dr. Mangala. G.S***
Under Secretary to Government,
Department of Personnel and Administrative Reforms
(Service Rules-1)



# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – ***IV-A*** | **ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧೩, ೨೦೧೩ (ಮಾರ್ಗಶಿರ ೨೨, ಶಕ ವರ್ಷ ೧೯೩೫)** | **ನಂ.೧೩೪೩** |
| ***Part – IV-A*** | ***Bangalore, Friday, December 13, 2013 (Margashira 22, Shaka Varsha 1935)*** | ***No.1343*** |



## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 30 ಎಸ್‌ಆರ್‌ಆರ್ 2013, ಬೆಂಗಳೂರು, ದಿನಾಂಕ: 13.12.2013**

ಕರ್ನಾಟಕ ರಾಜ್ಯ ನಾಗರಿಕ ಸೇವಾ ಅಧಿನಿಯಮ, 1978 (1990 ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯ ಪಡಿಸಲಾದಂತೆ, ಅದರಿಂದ ತೊಂದರೆಗೊಳಗಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಮತ್ತು ಸದರಿ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಅದು ಪ್ರಕಟವಾದ ದಿನಾಂಕದಿಂದ 15 ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಯಾವುದೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರ ಪರಿಗಣಿಸುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನ ಸೌಧ, ಬೆಂಗಳೂರು–560 001 ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

1. **ಶಿರೋನಾಮೆ ಮತ್ತು ಪ್ರಾರಂಭ.–**

(1) ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) (ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಇದು ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ–5 ರ ತಿದ್ದುಪಡಿ.–** ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 5ರ ಉಪನಿಯಮ 5ರಲ್ಲಿ **"**7ನೇ ತರಗತಿ**"** ಈ ಪದಗಳ ಬದಲಿಗೆ **"**10 ನೇ ತರಗತಿ ಅಥವಾ ಸಮಾನಾಂತರ ವಿದ್ಯಾರ್ಹತೆ**"** ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಮಂಗಳ. ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## ***PERSONNEL AND ADMINISTRATIVE REFORMS SECRETARIAT***

### ***NOTIFICATION***

***NO. DPAR 30 SRR 2013, Bangalore, dated: 13.12.2013***

The draft of the following rules further to amend the Karnataka Civil Services (General Recruitment) Rules, 1977, which the Government of Karnataka proposes to make in exercise of the powers conferred by sub-section (1) of Section 3 read with Section 8 of the Karnataka State Civil Services Act, 1978 (Karnataka Act 14 of 1990) is hereby published as

required by Clause (a) of sub-section (2) of Section (3) of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore-560 001.

***DRAFT RULES***

***1. Title and Commencement:*** (1) These rules may be called The Karnataka Civil Services (General Recruitment) (..........Amendment) Rules, 2013.

(2) They shall come into force from the date of their publication in the Official Gazette.

***2. Amendment of Rule 5:*** In rule 5 of the Karnataka Civil Services (General Recruitment) Rules, 1977, in sub-Rule (5), for the words " seventh standard " the words "tenth standard or equivalent qualification" shall be substituted.

By order and in the name of the Governor of Karnataka

***Dr. Mangala. G.S***
Under Secretary to Government,
Department of Personnel and Administrative Reforms
(Service Rules-1)

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ – ***IV-A*** | **ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧೩, ೨೦೧೩ (ಮಾರ್ಗಶಿರ ೨೨, ಶಕ ವರ್ಷ ೧೯೩೫)** | **ನಂ.೧೩೪೪** |
| ***Part – IV-A*** | ***Bangalore, Friday, December 13, 2013 (Margashira 22, Shaka Varsha 1935)*** | ***No.1344*** |



## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 333 ಎಂಆರ್‌ಇ 2013 (ಭಾಗ), ಬೆಂಗಳೂರು, ದಿನಾಂಕ: 13.12.2013**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(*ix*)** ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಮಧುಗಿರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ :

| ಕ್ರ ಸಂ. | ಹೆಸರು ಮತ್ತು ವಿಳಾಸ |
|---|---|
| 01 | ಶ್ರೀ ಆರ್.ಸಿ.ವಿಜಯಕುಮಾರ್ ಜೈನ್,<br>ಬಿನ್ ಲೇಟ್ ಆರ್.ಎಸ್.ಚಾರಣ,<br>ನ್ಯಾರೋನಗರ, ರೋಟರಿ ಕ್ಲಬ್ ಮುಂಭಾಗ,<br>ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. |
| 02 | ಶ್ರೀ ಶನಿವಾರಂರೆಡ್ಡಿ ಬಿನ್ ಹನುಮಯ್ಯ,<br>ಐ.ಡಿ.ಹಳ್ಳಿ ಅಂಚೆ, ಐ.ಡಿ.ಹಳ್ಳಿ ಹೋಬಳಿ,<br>ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ. |
| 03 | ಶ್ರೀಮತಿ ನಾಗರತ್ನಮ್ಮ ಕೋಂ ತಿಮ್ಮಯ್ಯ,<br>ರಂಟವಳಲು ದೊಡ್ಡೇರಿ ಹೋಬಳಿ,<br>ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಸೋಮವಾರ, ಡಿಸೆಂಬರ್ ೧೬, ೨೦೧೩ (ಮಾರ್ಗಶಿರ ೨೫, ಶಕ ವರ್ಷ ೧೯೩೫) | ನಂ.೧೩೪೫ |
| ***Part – IV-A*** | ***Bangalore, Monday, December 16, 2013 (Margashira 25, Shaka Varsha 1935)*** | ***No.1345*** |


## *COMMERCE AND INDUSTRIES SECRETARIAT*

### *NOTIFICATION*

### *No. CI 357 MMN 2012, Bangalore, dated: 16 -12-2013*

In exercise of the powers conferred by section 15 of the Mines and Minerals (Regulation and Development) Act, 1957 (Central Act 67 of 1957), the Government of Karnataka, hereby makes the following rules further to amend the Karnataka Minor Mineral Concession Rules, 1994, namely:-

### *RULES*

***1. Title and commencement: -*** (1) These rules may be called the Karnataka Minor Mineral Concession (Amendment) Rules, 2013.

(2) They shall come into force from the date of their publication in the Official Gazette.

***2. Amendment of rule 2. -*** In the Karnataka Minor Mineral Concession Rules, 1994, (hereinafter referred to as the said rules),-

(1) in rule (2),-

(i) after the heading "Definitions.-" the figure and bracket"(1)" shall be inserted;

(ii) after clause (a), the following shall be inserted, namely:-

"(a-1)" Approving authority" means the Authority competent to approve,-

(i) in respect of Environment management plan, the Regional Environment Management Committee; or the State Environment Impact Assessment Authority; or the Ministry of Environment and Forest, as the case may be; and

(ii) in respect of quarrying plan, the Director, mines and geology or his authorized officer for specified minor mineral; and Deputy Director/Senior Geologist of the concerned district, for non-specified minor mineral;

(a-2) "Boundary Pillar" means the cemented or solid stone pillar of size 0.6m x 0.6m or more with a regular dimensions creating clear visibility having one meter height and 0.5 meter foundation painted with the yellow paint and marked with lease / license number, GPS co-ordinates and pillar number in black paint;

(a-3) "Bulk Quantity" means the wholesome quantity of mineral, which is intended for transportation under Computerized Mineral Dispatch Permit (CMDP);

(a-4) "Cluster" means the geographical boundary declared by the Director mines and geology in respect of specified minor mineral and Deputy Director/Senior Geologist of concerned district in respect of non-specified minor mineral for quarrying areas which already exists or to be granted in future;

(a-5) "Cluster association" means the association formed by holder of quarry lease/quarry license/working permission/sand quarry permission falling in the cluster for collective implementation of Environment management Plan (EMP);

(a-6) "Co-operative Societies" means the co-operative societies registered under the Karnataka Co-operative Societies Act, 1959;"

(iii) after clause (d), the following shall be inserted namely:-

"(d-1) "Environment" and "Environmental Pollution" shall have the same meanings as assigned to them in the Environment (Protection) Act, 1986(Central Act No.29 of 1986);

(d-2) "Environment Management Plan (EMP)" means a plan prepared by an individual or a cluster association through recognized qualified person. In respect of ordinary sand, Environment management Plan (EMP) shall be prepared by Deputy Director/Senior Geologist of concerned district on behalf of District Sand Monitoring Committee through recognised qualified person;

(d-3) "Environment Management Fee" means a fee which is separately collected for sand and credited into the account of "corpus fund" of concerned District Sand Monitoring Committee and utilized for reclamation, rehabilitation and implementation of Environment Management Plan and for any other works specified by Government from time to time;

(d-4) "Filter sand" means an imitative sand material, which is processed by removal of silt and clay components from the soil;

(d-5) "Financial assurance" means the sureties furnished by the holder of quarrying lease/ quarry license / working permission to the competent authority concerned so as to indemnify the authorities against the reclamation and rehabilitation cost and in the manner as specified by the government from time to time;

(d-6)"Final mine closure plan" means a plan for the purpose of post-closure measures of a decommissioned quarry, cluster or part thereof after cessation of quarrying operations;

(d-7)"ILMS" means Integrated Lease Management System adopted in the department for e administration and management.

(iv) after clause (e), the following shall be inserted, namely:-

"(e-1) "Mine Closure" means steps taken in accordance with progressive mine closure plan or final mine closure plan for reclamation, rehabilitation measures in respect of a quarry / cluster or part thereof to restore physical, chemical and biological quality disturbed by the quarrying;

(e-2) "Mineral Despatch Release Order" (MDRO) means, an order issued by the competent authority for a specified bulk quantity of mineral to be transported after collecting Royalty;

(e-3) "MoEF" means The Ministry of Environment and Forest, Government of India."

(v) for clause (h), the following shall be substituted, namely:-

"(h) "Permit" means a Computerized Mineral Dispatch Permit (CMDP) generated in electronic form either using internet or mobile technology in Special Security Permit Paper (SSPP);

(h-1)"Progressive mine closure plan" means a component of quarry plan submitted by the lessee/licensee/working permission holder or by the cluster association, which includes series of activities, proposals of scientific quarrying;"

(vi) after clause (k), the following shall be inserted, namely:-

"(k-1) "Quarrying Plan" means a plan comprising adoption of proper mining methods and optimum utilization of minerals prepared by all lessees /licensees/working permission holders through the recognized qualified person (RQP) and includes simplified quarrying plan required to be submitted for having an area less than the extent stipulated;

(k-2) "Quarrying" or "Mining" means the excavation of minor minerals sheltered;

(k-3) "Recognized qualified person (RQP)" means in respect of preparation of quarrying plan, a person to whom recognition is granted for this purpose, by the Director, Mines and Geology or officer authorized by him; or a person recognized under rule 22C of the Mineral Concession Rules, 1960 and in respect of preparation of Environment management Plan, a person or agency accredited by National Accreditation Board for Education and training(NABET) or Quality Control of India (QCI);

(k-4) "Regional Environment Management Committee" means committee constituted under rule 8S for approving Environment Management Plan of all the mining activities/projects of minor minerals having an area of which are not falling within the jurisdiction of SEIAA or MoEF;

(k- 5) "River bank" means the High Flood Level (HFL) of a river. "

(vii) after clause (m), the following shall be inserted, namely:-

"(m-1) "Scheduled castes/Scheduled tribes" means the scheduled castes and scheduled tribes as specified in the constitution (scheduled castes and scheduled tribes) order 1950;

(m-2) "SEIAA" means State Environmental Impact Assessment Authority constituted by MoEF for approving Environment management plan of all mining activities/projects having concession area less than fifty hectares or as specified from Central Government from time to time.

(m-3) "Simplified Quarrying plan" means a quarrying plan prepared by the Recognized Qualified Person for the quarrying area having less than stipulated extent in schedule IIA and in accordance with guidelines and format issued by Indian Bureau of Mines;

(m-4) "SC/ST Co-Operative societies" means societies comprising not less than seventy five percent of its members belonging to the scheduled castes or scheduled tribes for claiming reservations under these rules;

(m-5) "SSPP" means Special Security Permit Paper issued by the competent authority for generating a computerized mineral dispatch permit in electronic forum;

(m-7) "Tenderer" means the successful bidder who has entered into an agreement with public works department for quarrying, transportation, storage and disposal and other operations of sand;"

(2) after sub-rule (1), the following shall be inserted, namely:-

"(2) words and expressions used but not defined in these rules shall have the same meaning respectively assigned to them in the Act and the Mineral Concession Rules, 1960 or in any other law for the time being in force."

***3. Amendment of rule 6. -*** In rule 6 of the said rules, after sub rule (1), the following shall be inserted, namely:-

"(1-A) To support systematic and scientific quarrying, the competent authority shall allow the quarrying of small and isolated leases/licences spread out in the area having individual extent less than stipulated area specified in schedule IIA under a cluster to conserve the Mineral resources by safeguarding environmental protection and a collective implementation of Environment Management plan approved by the approving authority;

Provided that such declared clusters shall be named after the village of the area for administrative convenience."

***4. Amendment of rule 8. -*** In rule 8 of the said rules, –

(a) after sub-rule (1), the following shall be inserted, namely:-

"(1A) No quarry lease/license/working permission shall be granted or renewed,-

(i) in contravention of environment impact assessment notification dated 14.09.2006 issued by the Ministry of Environment and Forest, Government of India, as amended from time to time;

(ii) without approved quarry plan or simplified quarrying plan; and

(iii) without obtaining environmental clearance from concerned authorities;"

(b) for sub-rule (5) and (6), the following shall be substituted, namely:-

"(5) The Competent Authority shall before granting or renewing a lease, license, working permission, consult,-

(i) in case of specified minor minerals, the Deputy Commissioner of the district concerned and obtain No Objection Certificate:

(ii) in the case of non-specified minor minerals, the Tahsildar of the Taluk concerned and obtain No Objection Certificate.

(iii) in case of all minor minerals, the Deputy Conservator of Forest of the concerned Jurisdiction and obtain No Objection Certificate.

(iv) in case of all minor minerals in Gomal/gayarana/hullubani kharab etc type of lands, the Assistant Commissioner of revenue department and Deputy Director/Senior Geologist concerned, who shall furnish a joint Inspection report through Deputy Commissioner in accordance with circular No RD 72 LGP 98 dated 24-2-1999.

(v) in case of all minor minerals, jurisdictional Mines and Geology officer and obtain technical report along with sketch duly mentioning GPS Co-ordinates; and shall take action in accordance with chapter III, in respect of specified minor mineral and in accordance with chapter IV and V, in respect of non-specified minor mineral as the case may be.

(6) If the Deputy Commissioner or the Tahsildhar or the Deputy Conservator of Forest or the Assistant Commissioner or the Deputy Director/Senior Geologist as the case may be, fails to give No Objection Certificate under sub-rule (5), within ninety days, the same shall be placed invariably before the District Taskforce (Mines) Committee in its monthly meetings by the competent authority. The opinion from concerned departmental officers shall be obtained in the meeting and recorded in the proceedings of the meeting and be disposed off accordingly.

(7) the grant or renewal of lease/license/working permissions shall be subject to such other conditions, if any as specified by the competent authority from time to time."

***5. Insertion of New Chapter-IIA. -*** After Chapter-II of the said rules, the following shall be inserted namely:-

**"*CHAPTER - IIA***

***Systematic, Scientific Mining and Protection of Environment***

***8C. Quarrying Plan be a pre-requisite to the grant of quarrying lease, quarry license, working permission and sand quarrying.-*** No quarrying lease/license/working permission/Sand tender shall be granted or renewed by the Competent authority unless there is a quarrying plan/simplified quarrying plan duly approved by the approving authority for the development of the minor minerals deposit.

***8D. Quarrying Plan to be prepared by a Recognized Qualified Person.-*** (1) no quarrying plan or simplified quarrying plan shall be approved by the approving authority unless it is prepared by a recognized qualified person.

(2) no person shall be recognized for preparation of Quarrying plan or simplified quarrying plan unless he has,-

(a) a degree in Mining Engineering or a post-graduate degree in Geology granted by a University including any institutions recognized by the University Grants Commission established under section 4 of the University Grants Commission Act, 1956 or any equivalent qualification granted by any University or institution outside India and have a professional experience of two years of working in a supervisory capacity in a recognized mine & quarey after obtaining a degree; or

(b) three years full time diploma certificate in Mining Engineering awarded by the State Technical Education Boards and have a professional experience of five years of working in a supervisory capacity in a recognized mine & quarey after obtaining diploma.

(3) The recognized qualified person shall also be competent to carry out modification of the quarrying plan / simplified quarrying plan.

***8E. Grant of recognition by the State Government.***-(1) any person possessing the qualifications and experience specified in sub rule (2) of rule 8D may apply along with a non-refundable fee of Rs.10,000/-, for recognition to the Director, mines and Geology (hereinafter referred to as director) or any officer authorized by the Director in this behalf.

(2) The Director or any officer authorized by the Director in this behalf, after making such enquiry as it deems fit, may grant or refuse to grant recognition. Where recognition is refused, the authority shall record reasons of refusal in writing and communicate the same to the applicant.

(3) The recognition shall be granted for an initial period of five years and may be renewed for further period not exceeding five years at a time. The Director or any officer authorized by the Director in this behalf may refuse to renew recognition for reasons to be recorded in writing after giving an opportunity of hearing to the person concerned.

***8F. Submission and approval of Quarrying plan / simplified Quarrying Plan.***-

(1) on receipt of the recommendations from government in respect of specified minor mineral and from district task force committee in respect of non-specified minor mineral as the case may be for grant of quarrying lease/ quarry license/ working permission, the competent authority shall take decision to grant precise area and communicate such decision to the applicant and on receipt of such communication of the precise area to be granted, the applicant shall submit to the competent authority a quarrying plan / simplified quarrying plan, as the case may be, along with a non-refundable fee of Rs. 2,000/- within a period of three months from the date on which such communication is received or such other period as may be allowed by the competent authority for approval.

(2) The quarrying plan / simplified quarrying plan shall include:-

(i) (a) the plan of the precise area showing the nature and extent of the mineral deposit.

(b) spot or spots where the excavation is to be done in the first year plan and its extent.

(c) a detailed cross-section and detailed plan of spots of excavation.

(d) a tentative scheme of quarrying for the second five year plan of the lease / license/ working permission;

(ii) details of the geology and lithology of the precise area including mineral reserves of the area;

(iii) the extent of manual quarrying or quarrying by the use of machinery and mechanical devices on the precise area other than sand quarrying;

(iv) the plan of the precise area showing natural water courses, limits of reserved and other forest areas and density of trees, if any, assessment of impact of quarrying activity on forest, land surface and environment including air and water pollution; details of scheme for restoration of the area by afforestation, land reclamation, use of pollution control devices and of such other measures under Mine Closure Plan – progressive and Final Mine Closure Plan or as be directed by the government from time to time;

(v) annual program and plan for excavation on the precise area from year to year for five years; and in case of sand, for two years;

(vi) any other matter which the approving authority or Regional Environment Management Committee may require the applicant to provide in the quarrying plan / simplified quarrying scheme.

***8G.Modifications of approved quarrying Plan/simplified quarrying plan:-***

(1) A successful sand bidder or a holder of a quarrying lease or quarry license or working permission if intends modifications in the approved quarrying plan or simplified quarrying plan as are considered, shall

